# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

೧೦ನೇ ವರ್ಷ ೧೪ನೇ ಸಂಚಿಕೆ ಬೆಲೆ ೩೦ ಪೈಸೆ

ಕೊಪ್ಪ ೨-೬-೧೯೯೧ ಭಾನುವಾರ ದೂರವಾಣಿ : ೧೧೪


## ಕೊಪ್ಪದಲ್ಲಿ ಬೀದಿ ನಾಟಕ "ಮಾರಿಹಬ್ಬ"

ಕೊಪ್ಪ : ಬಲಿಯ ಕೋಣ ಅಥವಾ ಕರುವನ್ನು ಭರ್ಜರಿಯಾಗಿ ಅಲಂಕರಿಸಿ, ಅದ್ದೂರಿ ಮೆರವಣಿಗೆ ಮಾಡಿಸಿ, ನಂತರ ಅದನ್ನು ಬಲಿಕೊಡುವುದು ಮಾರಿಹಬ್ಬದ ಮುಖ್ಯ 'ಕಾರ್ಯಕ್ರಮ.'

ನಮ್ಮ ಪ್ರಸಕ್ತ ಚುನಾವಣಾ ಪದ್ಧತಿಯಲ್ಲಿ ಮತದಾರರೇ ಈ ರೀತಿಯ ಬಲಿಪಶುಗಳು; ಅವರೇ 'ಪ್ರಭು'ಗಳೆಂದು ವೈಭವೀಕರಿಸಲ್ಪಟ್ಟು ನಂತರ, ಪಟ್ಟಭದ್ರರ ಹಿತ ಮಾತ್ರ ಕಾಯುವ ಚುನಾವಣೆಯೆಂಬ ವಧಾ ಸ್ಥಾನದಲ್ಲಿ ಕತ್ತುಕೊಯ್ಸಿಕೊಳ್ಳುವವರು–ಎಂಬುದು 'ಬೀಚಿ'ಯವರ 'ಕಲ್ಪನೆ'.

ಇದೇ ಕಲ್ಪನೆಯನ್ನಾಧರಿಸಿದ ಬೀದಿ ನಾಟಕ 'ಮಾರಿಹಬ್ಬ' ವನ್ನು ಚಿಕ್ಕಮಗಳೂರಿನ 'ಭೂಮಿಕಾ' ತಂಡದವರು ಕೊಪ್ಪದಲ್ಲಿ ಇದೇ ೮-೬-೯೧ನೇ ಶನಿವಾರ ಆಡಲಿದ್ದಾರೆ. ಕೊಪ್ಪ ಜೇಸಿ ಮತ್ತು ಬ್ಯಾಂಕರ್ಸ್ ರಿ! ಕ್ಲಬ್ ಆಶ್ರಯದಲ್ಲಿ ನಡೆಯುವ ಈ ಬೀದಿ ನಾಟಕ ಪ್ರದರ್ಶನದ ಸ್ಥಳ ಮತ್ತು ಸಮಯ ಈ ರೀತಿ ಇವೆ :

ಬೆಳಗ್ಗೆ ೧೧-೩೦ಕ್ಕೆ ಮೇಲಿನಪೇಟೆ ಚಿಕ್ಕಮಗಳೂರು ಸರ್ಕಲ್ ಬಳಿ; ಮಧ್ಯಾಹ್ನ ೪ಕ್ಕೆ ಕರ್ನಾಟಕ ಬ್ಯಾಂಕ್ ಬಳಿ ಹಾಗೂ ರಾತ್ರಿ ೯ಕ್ಕೆ ಭಾರತ್ ರೈಸ್‌ಮಿಲ್ ಹತ್ತಿರ ತ್ಯಾಗರಾಜ ರಸ್ತೆಯಲ್ಲಿ.

### ನೆಮ್ಮಾರು ಬಳಿಯ ಮೇ ೨೪ರ ದರೋಡೆ ಪ್ರಕರಣ :

## ಮಂಗಳೂರಲ್ಲಿ ಡಕಾಯಿತರ ಸೆರೆ ?

**ಶೃಂಗೇರಿ : ಇಲ್ಲಿಗೆ ಸಮೀಪದ ತನುಕೋಡು ಶ್ರೀನಿವಾಸ ನಾಯ್ಕರ ಮನೆಯಲ್ಲಿ ಮೇ ೨೪ರ ಬೆಳಗಿನ ಜಾವ ದರೋಡೆ ನಡೆಸಿ, ೧ ಲಕ್ಷ ರೂ ಗಳಷ್ಟು ಬೆಲೆಯ ವಸ್ತು-ಒಡವೆ ದೋಚಿದ್ದವರಲ್ಲಿ ನಾಲ್ವರನ್ನು ಪೋಲೀಸರು ಮಂಗಳೂರಿನಲ್ಲಿ ಬಂಧಿಸಿದ್ದಾರೆಂದು ವರದಿಯಾಗಿದೆ.**

ಮೇ ೨೫ರಂದೇ ಪಣಂಬೂರಿನಲ್ಲಿ ಅನುಮಾನದ ಮೇಲೆ ಪೋಲೀಸರು ಕಾರೊಂದನ್ನು ಡ್ರೈವರ್ ಸಹಿತ ವಶಕ್ಕೆ ತೆಗೆದುಕೊಂಡಿದ್ದು, ಇಲ್ಲಿನ ಪೋಲೀಸರು ತನಿಖೆಗಾಗಿ ಅಲ್ಲಿಗೆ ಹೋಗಿದ್ದನ್ನು ಸ್ಮರಿಸಬಹುದು.

ಮೇ ೩೧ರಂದು ಮಂಗಳೂರಿನ ಜೆಪ್ಪು ಎಂಬಲ್ಲಿನ ಮನೆಯೊಂದರ ಮೇಲೆ ಪೋಲೀಸರು ದಾಳಿ ಮಾಡಿ, ಮನೆಯ ಬಾಗಿಲು ಮುರಿದು ಒಳ ಪ್ರವೇಶಿಸಿದಾಗ, ಅಲ್ಲಿದ್ದ ನಾಲ್ವರು ಒಂದು ಕೋಣೆಯೊಳಗೆ ಅವಿತುಕೊಳ್ಳಲು ಯತ್ನಿಸಿದರೆಂದೂ, ಪೋಲೀಸರು ಕೋಣೆಯ ಬಾಗಿಲನ್ನೂ ಒಡೆದಾಗ ಇಬ್ಬರು ತಪ್ಪಿಸಿಕೊಳ್ಳಲು ಯತ್ನಿಸಿದರೆಂದೂ, ಆದರೆ ಪೋಲೀಸರು ನಾಲ್ವರನ್ನೂ ಬಂಧಿಸುವಲ್ಲಿ ಯಶಸ್ವಿಯಾದರೆಂದೂ ವರದಿಯಾಗಿದೆ

ಈ ವ್ಯಕ್ತಿಗಳು ಈಚೆಗಷ್ಟೇ ಸದರಿ ಮನೆಗೆ ಬಾಡಿಗೆಗೆ ಬಂದಿದ್ದು, ತುಂಬಾ ಮೋಜಿನ ಜೀವನ ನಡೆಸುತ್ತಿದ್ದರೆಂದೂ, ಸುತ್ತಮುತ್ತಲಿನವರಿಗೆ ಕೂಡ ಇದರಿಂದ ಉಪಟಳವಾಗುತ್ತಿತ್ತೆಂದೂ ಹೇಳಲಾಗಿದೆ.

ಇವರ ಬಂಧನದ ಕಾರ್ಯಾಚರಣೆಯನ್ನು ಸ್ಥಳೀಯ (ಮಂಗಳೂರಿನ) ಪೋಲೀಸರು ನಡೆಸಿದ್ದಲ್ಲ; ಬಹುಶಃ ಶೃಂಗೇರಿಯ ಪೋಲೀಸರೇ ನಡೆಸಿರಬಹುದೆಂದು ಊಹಿಸಲಾಗಿದೆ. ಬಂಧಿತರಿಂದ ಏನಾದರೂ ವಸ್ತುಗಳನ್ನೂ ವಶಪಡಿಸಿಕೊಳ್ಳಲಾಗಿದೆಯೆ ಎಂಬುದು ಗೊತ್ತಾಗಿಲ್ಲ.

ಜೂನ್ ೧ರ 'ಉದಯವಾಣಿ'ಯಲ್ಲಿ ಪ್ರಕಟವಾಗಿರುವ ಈ ವರದಿಯ ಬಗ್ಗೆ ಅಧಿಕೃತವಾಗಿ ಏನನ್ನೂ ಖಚಿತಪಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕೊಪ್ಪ ಸರ್ಕಲ್ ಇನ್ಸ್‌ಪೆಕ್ಟರ್‌ರಿಗಾಗಲಿ, ಚಿಕ್ಕಮಗಳೂರಿನ ಪೋಲೀಸ್ ಕಂಟ್ರೋಲ್ ರೂಂಗಾಗಲಿ ಯಾವುದೂ ಸುದ್ದಿ ಬಂದಿಲ್ಲವಂತೆ. ಎಸ್ಪಿಯವರು ದೂರವಾಣಿಯಲ್ಲಿ ಸಿಕ್ಕಲಿಲ್ಲ.

## ಬಿಳಾಲುಕೊಪ್ಪದಲ್ಲಿ ಸುಗಾರರಿಗೆ ಬೀಳ್ಕೊಡುಗೆ

ಬಿಳಾಲುಕೊಪ್ಪ : ಶಿವಮೊಗ್ಗಕ್ಕೆ ವರ್ಗವಾಗಿರುವ ಡಿಎಫ್‌ಒ ಕಿಶನ್‌ಸಿಂಗ್ ಸುಗಾರ ಅವರಿಗೆ ಇಲ್ಲಿನ ನಾಗರಿಕರು ಮೇ ೧೯ರಂದು ಆತ್ಮೀಯ ಬೀಳ್ಕೊಡುಗೆ ನೀಡಿದರು. ಮಂಡಲ ಪ್ರಧಾನ ಬಿ. ಎನ್. ಭಾಸ್ಕರ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಇದೇ ಸಂದರ್ಭದಲ್ಲಿ ನೂತನ ಡಿಎಫ್‌ಒ ಬಿ ರಘೋತ್ತಮರಾವ್ ಅವರಿಗೆ ಸ್ವಾಗತ ಕೋರಲಾಯಿತು. ಉಪಪ್ರಧಾನ ದೇವೇಂದ್ರ ಅವರು ಸುಗಾರರಿಗೆ ನೆನಪಿನ ಕಾಣಿಕೆ ಸಲ್ಲಿಸಿದರು

ಬಿ. ವಿ ಶ್ರೀಧರರಾವ್, ಜೆ. ಕೆ. ಶಿವಶಂಕರ್, ಕೆ.ಆರ್. ದೇವೇಂದ್ರ, ಜಾಳುಮರ ಸುಬ್ರಾವ್ ಹಾಗೂ ರಘೋತ್ತಮರಾವ್ ಮತ್ತು ಸುಗಾರ ಮಾತನಾಡಿದರು.

ಬಲಿತ ಗಂಧದ ಮರಗಳನ್ನು ಸರ್ಕಾರದ ವತಿಯಿಂದಲೇ ಸಂಗ್ರಹಿಸಿ ಸಾಗಿಸಬೇಕು ಮತ್ತು ಭೂ ಮಾಲಿಕರು ಕಾಡನ್ನು ಒತ್ತುವರಿ ಮಾಡಿ ಅಕ್ರಮವಾಗಿ ಮರ ಕಡಿಯುವುದನ್ನು ತಡೆಗಟ್ಟಬೇಕು ಎಂಬ ಗ್ರಾಮಸ್ಥರ ಬೇಡಿಕೆಗಳ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವುದಾಗಿ ರಘೋತ್ತಮರಾವ್ ತಿಳಿಸಿದರು. ಗಂಧದ ಮರಗಳು ೧೦ ವರ್ಷಕ್ಕೆ ೪ ಸೆಂಟಿಮೀಟರ್‌ನಂತೆ ೪೦ ವರ್ಷಗಳಲ್ಲಿ ೧೬ ಸೆಂ.ಮೀ ದಪ್ಪ ಬೆಳೆಯುತ್ತವೆ. ಅಂಥ ಎಲ್ಲ ಮರಗಳನ್ನೂ ಕಡಿಸಲು ಕಾನೂನಿನಂತೆ ಇಲಾಖೆಗೆ ಅವಕಾಶವಿದೆ ಎಂದು ಅವರು ಹೇಳಿದರು.

ಜೆ. ಕೆ ಶಿವಶಂಕರ್ ಸ್ವಾಗತಿಸಿ, ಶ್ರೀಧರರಾವ್ ವಂದಿಸಿದರು.

## ವಿಶೇಷ ಅಕ್ಕಿ ಉತ್ಪಾದನಾ ಯೋಜನೆಯ ಸೌಲಭ್ಯಗಳು

೧೯೯೧-೯೨ ನೇ ಸಾಲಿನ ಮುಂಗಾರು ಹಂಗಾಮಿನಲ್ಲಿ ಕೃಷಿ ಇಲಾಖೆಯಿಂದ ವಿಶೇಷ ಅಕ್ಕಿ ಉತ್ಪಾದನಾ ಯೋಜನೆಯಡಿಯಲ್ಲಿ ಈ ಕೆಳಗಿನ ವಿವಿಧ ಸೌಲಭ್ಯಗಳು ದೊರೆಯುತ್ತವೆ.

ಇಂಟಾನ್ ಹೊರತಾಗಿ ಇತರೆ ದೃಢೀಕೃತ ಬಿತ್ತನೆ ತಳಿಗಳಾದ ಐಇಟಿ ೭೧೯೧, ಜಯ, ಮಂಡ್ಯ ವಿಜಯ, ಐ ಆರ್. ೨೦ ತಳಿಗಳಿಗೆ ಕ್ವಿಂಟಾಲಿಗೆ ೨೦೦ ರೂ.ಗಳಂತೆ ಸಹಾಯಧನ ದೊರೆಯುತ್ತದೆ. ಶೇ ೫೦ರ ರಿಯಾಯ್ತಿಯಲ್ಲಿ ಸತುವಿನ ಸಲ್ಫೇಟ್ ಕೃತಕ ಗೊಬ್ಬರ ಹಾಗೂ ಶೇ. ೫೦ರ ರಿಯಾಯ್ತಿಯಲ್ಲಿ ಕಳೆನಾಶಕವನ್ನು ಒದಗಿಸಲಾಗುತ್ತದೆ. ರಿಯಾಯ್ತಿ ದರದಲ್ಲಿ ವಿವಿಧ ಸಸ್ಯ ಸಂರಕ್ಷಣಾ ರಾಸಾಯನಿಕಗಳನ್ನು ಕೊಡಲಾಗುತ್ತದೆ.

## ಜೀರ್ಣೋದ್ಧಾರಗೊಂಡ ಮೇಗುಂದ ಬಸದಿಯಲ್ಲಿ 'ಧಾಮ ಸಂಪ್ರೋಕ್ಷಣೆ'

ಶಾಂತಿಗ್ರಾಮ : ಇಲ್ಲಿನ ಪುರಾತನ ಜೈನ ದೇಗುಲವಾದ ಶಾಂತಿನಾಥಸ್ವಾಮಿ ಬಸದಿ (ಮೇಗುಂದಾ ಬಸದಿ) ಈಚೆಗೆ ಜೀರ್ಣೋದ್ಧಾರಗೊಂಡಿದ್ದು, ಆ ಪ್ರಯುಕ್ತ 'ಧಾಮ ಸಂಪ್ರೋಕ್ಷಣೆ'ಯ ಕಾರ್ಯಕ್ರಮಗಳು ಜೂನ್ ೨ರಿಂದ ೫ರವರೆಗೆ ಬಸದಿಯಲ್ಲಿ ನಡೆಯುತ್ತವೆ. ಈ ಕಾರ್ಯಕ್ರಮಗಳಲ್ಲಿ ಹಲವು ಮಂದಿ ಜೈನ ಮುನಿಗಳು, ಧಾರ್ಮಿಕ ಮುಖಂಡರು ಪಾಲ್ಗೊಳ್ಳಲಿದ್ದಾರೆ.

## ಕನ್ನಡಕ ಕಳೆದಿದೆ

ಸಾದಾ ರೀತಿಯ **"ಸವಾರಿ ಕನ್ನಡಕ"** ವೊಂದು (ರೈಡಿಂಗ್ ಗ್ಲಾಸ್) ಕಳೆದ ತಿಂಗಳ (ಮೇ) ೮ರಂದು ಶೃಂಗೇರಿಯಲ್ಲಿ ಕಳೆದುಹೋಗಿದೆ ಕಲ್ಕುಳಿ ವಿಠಲ ಹೆಗ್ಡೆಯವರ ಪಂಪ್‌ಹೌಸ್ ಬಳಿ ಅಥವಾ ಅದರ ಆಸುಪಾಸಿನ ಅಂಗಡಿ–ಹೋಟೆಲ್‌ಗಳ ಬಳಿ ಕಳೆದುಹೋಗಿರಬೇಕು. ಯಾರಿಗಾದರೂ ಸಿಕ್ಕಿದ್ದಲ್ಲಿ ಕಲ್ಕುಳಿ ವಿಠಲ ಹೆಗ್ಡೆಯವರಿಗಾಗಲಿ, ಕೊಪ್ಪ 'ಮುಂಜಾವು' ಕಾರ್ಯಾಲಯಕ್ಕಾಗಲಿ ದಯವಿಟ್ಟು ತಲುಪಿಸಲು ಕೋರಿದೆ.

## ಮೇರ್ತಿ ಪರ್ವತಾರೋಹಣ

ಶೃಂಗೇರಿ ನೇಚರ್ ಅಡ್ವೆಂಚರ್ ಕ್ಲಬ್ (ಸ್ನಾಕ್)ನ ವತಿಯಿಂದ ಜೂನ್ ತಿಂಗಳ ೧೫-೧೬ ರಂದು ಮೇರ್ತಿ ಪರ್ವತಾರೋಹಣ ಹಾಗೂ ಹೊರನಾಡಿಗೆ ಚಾರಣ ಕಾರ್ಯಕ್ರಮವನ್ನು ಯೋಜಿಸಲಾಗಿದೆ. ಇದರಲ್ಲಿ ಭಾಗವಹಿಸಲು ಆಸಕ್ತಿಯುಳ್ಳವರು ೫೫ ರೂ. ಮನಿಆರ್ಡರನ್ನು ಡಾ॥ ಜಿ ಕೆ. ಭಟ್, ಸ್ನಾಕ್ ಅಧ್ಯಕ್ಷರು, ಶೃಂಗೇರಿ ಇವರಿಗೆ ಕಳಿಸಿ ಹೆಚ್ಚಿನ ಮಾಹಿತಿ ಪಡೆಯಬಹುದು ಈಗಾಗಲೇ ಸ್ನಾಕ್ ಸದಸ್ಯರಾಗಿರುವವರು ೩೦ರೂ. ಮಾತ್ರ ಕೊಟ್ಟು ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಬಹುದು.

## ರಾಜೀವ್ ಹತ್ಯೆಗೆ ಶೋಕ

ಕಲ್ಲುಗುಡ್ಡೆ : ಇಲ್ಲಿನ ವಿವೇಕಾನಂದ ಯುವಕ ರೈತ ಸಂಘದ ಆಶ್ರಯದಲ್ಲಿ ಮೇ ೨೨ ರಂದು ಸಂತಾಪ ಸಭೆ ನಡೆದು, ಮಾಜಿ ಪ್ರಧಾನಿ ರಾಜೀವ್ ಗಾಂಧಿ ಹತ್ಯೆಗೆ ತೀವ್ರ ಶೋಕ ವ್ಯಕ್ತಪಡಿಸಿ ೨ ನಿಮಿಷ ಮೌನ ಆಚರಿಸಲಾಯಿತು.

ಎ. ಅನಂತಯ್ಯ ಅಧ್ಯಕ್ಷತೆ ವಹಿಸಿದ್ದರು. ನೇಮಿರಾಜಯ್ಯ ಮುಖ್ಯ ಅತಿಥಿಯಾಗಿದ್ದರು. ಮಂಡಲ ಸದಸ್ಯ ಜೆ. ಕೆ. ಶಿವಶಂಕರ್ ಮತ್ತು ಎಚ್. ಕೆ. ವೀರಪ್ಪ, ಪಟ್ಟಾಭಿರಾಮ, ಬಿ ಎಲ್. ವೆಂಕಟರಮಣ ಇವರುಗಳು ರಾಜೀವ್ ಹತ್ಯೆಯನ್ನು ಖಂಡಿಸಿದರು. ಸಂಘದ ಅಧ್ಯಕ್ಷ ಎಸ್. ಟಿ. ಗಣಪತಿ ಸ್ವಾಗತಿಸಿ ವಂದಿಸಿದರು.

## ಓದುಗರ ಪತ್ರಗಳು

### ತಂತಿ ಕಂಬದಲ್ಲಿ ಬೆಂಕಿ

ಪ್ರಿಯರೆ,

ಬಾಳೆಹೊನ್ನೂರಿನಿಂದ ಕೊಪ್ಪಕ್ಕೆ ಹೋಗುವ ೩೩,೦೦೦ ವೋಲ್ಟ್ ವಿದ್ಯುತ್ ಲೈನಿನಲ್ಲಿ, ನಮ್ಮ ಮನೆಯ ಹತ್ತಿರವಿರುವ ಕಂಬದಲ್ಲಿ ಮೇ ೧೬ ಮತ್ತು ೧೭ರಂದು ಭಯಂಕರ ಬೆಂಕಿ ಕಂಡು ಬಂತು ಈ ಬಗ್ಗೆ ಕೂಡಲೇ ನಾವು ಬಾಳೆಹೊನ್ನೂರು ಕ. ವಿ. ಮಂ. ಅಧಿಕಾರಿಗಳಿಗೆ ತಿಳಿಸಿದರೂ ಇನ್ನೂ ಈ ಬಗ್ಗೆ ನಿಗಾ ವಹಿಸಿಲ್ಲ. ಈಗಲಾದರೂ ಎಚ್ಚೆತ್ತು ಮುಂದಾಗಬಹುದಾದ ಅನಾಹುತ ತಪ್ಪಿಸುವರೆ?

### ಕಳಪೆ ಬಿತ್ತನೆ ಬೀಜ

ಬಾಳೆಹೊನ್ನೂರಿನ ವ್ಯ. ಸೇ. ಸ. ಸಂಘದಿಂದ ಕ್ವಿಂಟಾಲಿಗೆ ೬೦೦ ರೂ. ಗಳಿಗೆ ಮಾರಾಟ ಮಾಡುತ್ತಿರುವ, ಸೀಡ್ಸ್ ಕಾರ್ಪೊರೇಶನ್ನಿನ ಇಂಟಾನ್ ಬಿತ್ತನೆ ಬೀಜ ತುಂಬಾ ಬೆರಕೆಯಿಂದ ಕೂಡಿದೆ. ಇದಕ್ಕಿಂತ ಸಾಮಾನ್ಯ ರೈತರ ಬಿತ್ತನೆ ಬೀಜವೇ ಚೆನ್ನಾಗಿದೆ. ರೈತರಿಗಾಗುತ್ತಿರುವ ಈ ಅನ್ಯಾಯವನ್ನು ಸಂಬಂಧಪಟ್ಟವರು ಕೂಡಲೇ ತಡೆಗಟ್ಟಲಿ.

—ಎಚ್.ಪಿ. ಗುರುಮೂರ್ತಿ,
ತುಪ್ಪೂರು, ಮೇಲ್ಪಾಲು.

## ಅಗಳಗಂಡಿ ಶಾಲೆಯ ಫಲಿತಾಂಶ ಕುಸಿತ ಚಿಂತನಾರ್ಹ

ಪ್ರಿಯರೆ,

ಪ್ರಾರಂಭವಾದ ವರ್ಷದಿಂದಲೇ ಜನಪ್ರಿಯವಾಗುತ್ತ ಒಂದು ಅತ್ಯುತ್ತಮ ಶಾಲೆ ಎಂದು ಹೆಸರು ಪಡೆದು, ಶೇ. ೮೦ ಕ್ಕೂ ಹೆಚ್ಚು ಸರಾಸರಿ ಫಲಿತಾಂಶ ಹೊಂದಿದ್ದ ಅಗಳಗಂಡಿಯ ಸರ್ಕಾರಿ ಪ್ರೌಢಶಾಲೆಯಲ್ಲಿ ಈ ವರ್ಷ ಫಲಿತಾಂಶ ಏಕಾಏಕಿ ನಲವತ್ತಕ್ಕೆ ಇಳಿದುಬಿಟ್ಟಿದೆ ಯಾಕೆ ಹೀಗೆ?

ಪ್ರಾರಂಭದಲ್ಲಿ ವಿದ್ಯಾರ್ಥಿಗಳಿಗೆ ಕೂರಲು ಸ್ಥಳ ಮತ್ತು ಆಸನ ವ್ಯವಸ್ಥೆ ಸರಿಯಿರಲಿಲ್ಲ. ಶಿಕ್ಷಕರ ಕೊರತೆಯಿತ್ತು. ಹಂಗಾಮಿ ಶಿಕ್ಷಕರು ಮಾತ್ರ ಇದ್ದರು. ಅಂಥ ಹಲವು ತೊಂದರೆಗಳು ಇದ್ದಾಗ ಸಹ ಉತ್ತಮ ಕಾರ್ಯ ನಿರ್ವಹಿಸುತ್ತಿದ್ದ ಶಾಲೆ, ಈ ತೊಂದರೆಗಳು ನಿವಾರಣೆ ಆದ ನಂತರ ಯಾಕೆ ಹೀಗಾಯಿತು?

ಹೋದ ವರ್ಷ ಸ್ವಲ್ಪ ಅವಧಿಗೆ ಮುಖ್ಯೋಪಾಧ್ಯಾಯರಾಗಿ ಬಂದ ಮಾಧ್ಯಮಿಕ ಶಾಲಾ ಶಿಕ್ಷಕರ ಕಾಲದಲ್ಲಿ ಶೇ. ೮೭ ಫಲಿತಾಂಶ ಪಡೆದ ಈ ಶಾಲೆ ಹೊಸ ಮುಖ್ಯೋಪಾಧ್ಯಾಯರು ಬಂದ ತಕ್ಷಣ ಯಾಕೆ ಹೀಗಾಯಿತು?

ಈ ವರ್ಷ ವಾರ್ಷಿಕೋತ್ಸವಕ್ಕೆ ಎಂದು ಮಾಡಿದ ಲಾಟರಿ ಡ್ರಾ ಆಗಿಯೇ ಇಲ್ಲ ಮತ್ತು ವಾರ್ಷಿಕೋತ್ಸವ ಆಚರಿಸಲೂ ಇಲ್ಲ. ಇದೇ ರೀತಿಯ ಪ್ರಕರಣಗಳಿಂದ ಈ ಹಿಂದೆ ಊರಿನಲ್ಲಿ ಇದ್ದ ಜನಬೆಂಬಲ ಕಡಿಮೆಯಾಗಿ ಎಲ್ಲರಿಂದಲೂ ದೂರುಗಳು ಬರುತ್ತಿವೆ.

ಸರ್ಕಾರಿ ಶಾಲೆಯೊಂದು ಇಷ್ಟೊಂದು ಉತ್ತಮವಾಗಿ ನಡೆಯುವುದು ಅಪರೂಪ ಎನ್ನಿಸಿಕೊಂಡು, ಇದು ಮಾದರಿಯಾಗಿತ್ತು. ಹೊರಗಡೆಯಿಂದಲೂ ವಿದ್ಯಾರ್ಥಿಗಳು ಬರಲು ಹವಣಿಸುತ್ತಿದ್ದರು. ಇಂತಹ ಮಾದರಿ ಶಾಲೆಯ ಹಿನ್ನಡೆ ಒಳ್ಳೆಯ ಬೆಳವಣಿಗೆಯಲ್ಲ ದಯವಿಟ್ಟು ಶಿಕ್ಷಕರು, ಶಾಲಾ ಸಲಹಾ ಸಮಿತಿಯ ಹಿರಿಯರು ಇದರತ್ತ ಗಮನ ವಹಿಸಿ ಇನ್ನೂ ಕೆಳಮಟ್ಟಕ್ಕೆ ಇಳಿಯದಂತೆ ಹಾಗೂ ಪುನಃ ಉನ್ನತಿ ಸಾಧಿಸುವಂತೆ ನೋಡಿಕೊಳ್ಳಲೆಂದು ಆಶಿಸುತ್ತೇನೆ. ಇದರಲ್ಲಿ ವಿದ್ಯಾರ್ಥಿಗಳ ಪಾಲೂ ಬಹಳ ಇದೆ ಅನ್ನುವುದನ್ನೂ ಮರೆಯುವುದು ಬೇಡ.

ಇಂತು ಶಾಲಾಭಿಮಾನಿ,
–ಎಚ್. ಎಂ ಗಿರೀಶ್, ಹುಲಿಗರಡಿ.

## ಇದು 'ಪ್ರಗತಿ ಪಥ'ವೆ ?

ಪ್ರಿಯರೆ,

"ದೇಶವನ್ನು ಪ್ರಗತಿಯೆಡೆಗೆ ಸಾಗಿಸಿ" "ದೇಶದ ಅಭಿವೃದ್ಧಿಗೆ ಸಹಕರಿಸಿ"—ಇದು ನಮ್ಮ (ಮಹಾನ್) ದೇಶದ ಬುದ್ಧಿಜೀವಿಗಳ, ರಾಜಕೀಯ ಪುಡಾರಿಗಳ ದಿನನಿತ್ಯದ ಬೊಬ್ಬೆ.

ಆದರೂ ನಮ್ಮ ದೇಶ ಮುಂದುವರಿಯಲಿಲ್ಲ; ಪ್ರಗತಿ ಸಾಧಿಸುತ್ತಿಲ್ಲ. ಯಾಕೆ? ಇದಕ್ಕೊಂದು ಇತ್ತೀಚಿನ ನಿದರ್ಶನ–ಮಾಜಿ ಪ್ರಧಾನ ಮಂತ್ರಿ ರಾಜೀವ್ ಗಾಂಧಿ ಇನ್ನಿಲ್ಲವಾದ ಸಂದರ್ಭ.

ಇದಕ್ಯಾಕೆ ಬೇಕಿತ್ತು ಒಂದು ವಾರದ ಶೋಕಾಚರಣೆ? ಮೂರು ದಿನಗಳ ಸರ್ಕಾರಿ ರಜೆ ಕೂಡ ಅಗತ್ಯವಿತ್ತೇ? ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ತಮ್ಮ ರಾಷ್ಟ್ರ ನಾಯಕರು ಸತ್ತರೆ ಕೇವಲ ಒಂದೋ, ಮೂರೋ ಸೆಕೆಂಡ್‌ನ ಮೌನಾಚರಣೆ ಮಾತ್ರ. ನಂತರ ಜನ, ಉದ್ಯಮ, ಸರ್ಕಾರಿ ಕಛೇರಿಗಳು ಮೊದಲಿನಂತೆಯೇ. ಆದರೆ ನಮ್ಮಲ್ಲಿ?

ಶೋಕ ಆಚರಿಸ್ಲಿಕ್ಕೇ ಒಂದು ವಾರವಾದ್ರೆ ಆ ಸಾವಿನ ದಳ್ಳುರಿ ಆರಲಿಕ್ಕೆ ಒಂದೆರಡ್ಮೂರು ತಿಂಗಳೇ ಬೇಕಾಗಬಹುದೇನೋ! ಇನ್ನು ಜನತೆ ಮಾಮೂಲು ಸ್ಥಿತಿಗೆ ಬರಲು ಸ್ವಲ್ಪ ಊಹಿಸುವುದು ಕಷ್ಟ.

ಅಲ್ಲಿ ಅವರು ಸತ್ತಿದ್ದಕ್ಕೆ, ಇಲ್ಲಿ ದೇಶದ ಯಾವ್ಯಾವುದೋ ಮೂಲೆಯಲ್ಲಿ ಹಿಂಸೆ, ಬೆಂಕಿಯಿಡುವುದು, ಧ್ವಂಸಕಾಂಡ.... ಇಂತಹ ಕಾರ್ಯದಿಂದ ಉಂಟಾಗುವ ಸಾಮಾನ್ಯ ಜನಜೀವನದ ಬವಣೆ ಹೇಳತೀರದು.

ಒಂದೆಡೆ ಪ್ರಗತಿ ಕಾರ್ಯದ ಸ್ಥಗಿತ, ಇನ್ನೊಂದೆಡೆ ಪ್ರಗತಿಯಾದದ್ದರ ನಾಶ, ಧ್ವಂಸ.

ಅಂತೂ ಭಾರತ ಮುಂದುವರಿಯಬೇಕು– ಇಂತಹ ನೂರಾರು "ಇದೊಂದೇ ಕಾರಣವಲ್ಲದ, ಇದೂ ಒಂದು ಕಾರಣ"ಗಳನ್ನು ಮೈಯೆಲ್ಲಾ ತುಂಬಿಸಿಕೊಂಡು....!

—'ಕೊರಾನಾ', ಕೊಪ್ಪ.

## ಅಂಚೆ ಕಛೇರಿ ಸ್ಥಳಾಂತರ ಬೇಡ

ಕೊಪ್ಪ ಪ್ರಧಾನ ಅಂಚೆ ಕಛೇರಿ ವ್ಯಾಪ್ತಿಗೆ ಒಳಪಡುವ ಬಾಳಗಡಿ ಸಬ್ ಪೋಸ್ಟ್ (ನಾನ್ ಡೆಲಿವರಿ) ಆಫೀಸು ಸುಮಾರು ೧೫-೨೦ ವರ್ಷಗಳಿಂದ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಸಾರ್ವಜನಿಕರಿಗೆ ತುಂಬಾ ಅನುಕೂಲಕರವಾಗಿದೆ. ಕೊಪ್ಪದಿಂದ ಸುಮಾರು ೩ ಕಿಲೋ ಮೀಟರ್ ದೂರದಲ್ಲಿರುವ ಬಾಳಗಡಿಯಲ್ಲಿ ತಾಲ್ಲೂಕು ಮಟ್ಟದ ಎಲ್ಲಾ ಕಛೇರಿಗಳೂ, ಶಾಲಾ ಕಾಲೇಜುಗಳೂ ಮತ್ತು ಸರ್ಕಾರಿ ನೌಕರರ ಮತ್ತು ಸಾರ್ವಜನಿಕರ ವಸತಿಗಳೂ ಇವೆ. ಸುಮಾರು ೧೦೦೦ ಮನೆಗಳು ಇಲ್ಲಿವೆ. ಈ ಗ್ರಾಮದ ಸುತ್ತಮುತ್ತಲಲ್ಲಿರುವ ರೈತಾಪಿ ಜನತೆಗೂ ಎಲ್ಲಾ ವರ್ಗದ ಜನತೆಗೂ ಈ ಅಂಚೆ ಕಛೇರಿ ತುಂಬಾ ಉಪಯುಕ್ತವಾಗಿದೆ.

ಆದರೆ ಈ ಅಂಚೆ ಕಛೇರಿಯನ್ನು ಹೊಸ ನಿಯಮವೊಂದರ ಅನ್ವಯ ಮುಚ್ಚಲಿರುವುದಾಗಿ ತಿಳಿಯಿತು. ಗ್ರಾಮಾಂತರ ಪ್ರದೇಶದ ಜನರ ಅನುಕೂಲಕ್ಕಾಗಿ ಇರುವ ಈ ಅಂಚೆ ಕಛೇರಿಯನ್ನು ಯಾವುದೇ ಕಾರಣದಿಂದ ಸ್ಥಳಾಂತರಿಸುವುದಾಗಲೀ, ಮುಚ್ಚುವುದಾಗಲೀ ಮುಂತಾಗಿ ಯಾವುದೇ ಜನವಿರೋಧಿ ಕ್ರಮ ಕೈಗೊಳ್ಳಬಾರದಾಗಿ ಕೋರುತ್ತೇವೆ.

—ಬಾಳಗಡಿ ನಿವಾಸಿಗಳು, ಕೊಪ್ಪ.
(೨೪ ಜನರ ಸಹಿಗಳಿವೆ)







ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು : ದೀಪವಟಿಗೆ ಅಚ್ಚುಕೂಟ, ಕೊಪ್ಪ